# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 531

ವಿಧಾನ ಪರಿಷತ್ ಸದಸ್ಯರ ಹೆಸರು : ಶ್ರೀ ರಘುನಾಥ್ ರಾವ್ ಮಲ್ಕಾಪೂರೆ (ವಿಧಾನಸಭಾ ಕ್ಷೇತ್ರದಿಂದ ಚುನಾಯಿತರಾದವರು)

ಉತ್ತರಿಸುವ ದಿನಾಂಕ : 16.09.2021

ಉತ್ತರಿಸುವ ಸಚಿವರು : ಮಾನ್ಯ ಜಲಸಂಪನ್ಮೂಲ ಸಚಿವರು

<table>
<tr><th>ಕ್ರ ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ</td><td>ಬೀದರ್ ಜಿಲ್ಲೆಯ ಮಾಂಜ್ರಾ ಸರಣಿ ಬ್ಯಾರೇಜ್‌ಗಳಲ್ಲಿನ ಗೇಟ್ ಸಮಸ್ಯೆಯಾಗಿ ನೀರು ನಿಲ್ಲದಿರುವುದರ ಬಗ್ಗೆ ತನಿಖೆಗೆ ಹೈಕೋರ್ಟ್ ಆದೇಶಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಅದರ ಸ್ಪಷ್ಟ ಮಾಹಿತಿ ಒದಗಿಸುವುದು.</td><td>ಹೌದು,<br>• ಬೀದರ್ ಜಿಲ್ಲೆಯ ಮಾಂಜ್ರಾ ಸರಣಿ ಬ್ಯಾರೇಜ್‌ಗಳಲ್ಲಿ ಗೇಟ್ ಸಮಸ್ಯೆಯಾಗಿ ನೀರು ನಿಲ್ಲದಿರುವುದರ ಬಗ್ಗೆ ಸಾಮಾಜಿಕ ಕಾರ್ಯಕರ್ತರಾದ ಶ್ರೀ ಗುರುನಾಥ ವಡ್ಡೆಯವರು ತನಿಖೆ ನಡೆಸಲು ಕೋರಿ ದಿನಾಂಕ: 08.03.2019 ರಂದು ಹೈಕೋರ್ಟ್‌ನಲ್ಲಿ WP No.15937/2019 ದಾಖಲಿಸಿದ್ದು, ಕೃಷ್ಣಾ ಭಾಗ್ಯ ಜಲ ನಿಗಮದ ಅಧಿಕಾರಿಗಳು ಸಲ್ಲಿಸಿರುವ ಪರಿವೀಕ್ಷಣಾ ವರದಿಯನ್ನು ಪರಿಶೀಲಿಸಿ, ಸದರಿ ಪ್ರಕರಣವನ್ನು ನ್ಯಾಯಾಲಯವು ವಜಾಗೊಳಿಸಿರುತ್ತದೆ.<br>• 04 ಬ್ಯಾರೇಜುಗಳಲ್ಲಿ 2016ರ ಸಾಲಿನಲ್ಲಿ ಸೆಪ್ಟೆಂಬರ್ ಹಾಗೂ ಅಕ್ಟೋಬರ್ ತಿಂಗಳಲ್ಲಿ ಮಾಂಜ್ರಾ ನದಿಯಲ್ಲಿ ಬೃಹತ್ ಪ್ರಮಾಣದ ಅಂದರೆ ಹೆಚ್.ಎಫ್.ಎಲ್(H.F.L) ಗಿಂತ 1.00 ಮೀ ರಿಂದ 4.60 ಮೀ. ಎತ್ತರಕ್ಕೆ ಬಂದ ಪ್ರವಾಹದಿಂದ ಕೆಲವು ಗೇಟುಗಳು ಹಾನಿಗೊಳಗಾಗಿದ್ದು, ಅವುಗಳನ್ನು ಮೂಲ ಗುತ್ತಿಗೆದಾರರಿಂದ ನಿಗಮಕ್ಕೆ ಹೆಚ್ಚಿನ ಆರ್ಥಿಕ ಹೊರೆ ಆಗದಂತೆ ದುರಸ್ತಿಗೊಳಿಸಿ, 2017ನೇ ಸಾಲಿನಲ್ಲಿ ಗೇಟುಗಳನ್ನು ಸಮರ್ಪಕವಾಗಿ ಅಳವಡಿಸಿ, ನೀರು ಶೇಖರಣೆ ಮಾಡಲಾಗಿರುತ್ತದೆ.</td></tr>
<tr><td>ಆ</td><td>4 ಬ್ಯಾರೇಜ್‌ಗಳ ನಿರ್ಮಾಣಕ್ಕೆ ಖರ್ಚು ಮಾಡಲಾಗಿರುವ ಹಣವೆಷ್ಟು; ಮತ್ತು ಯಾವ ವರ್ಷದಲ್ಲಿ ಬ್ಯಾರೇಜ್‌ಗಳನ್ನು ನಿರ್ಮಾಣ ಮಾಡಲಾಗಿದೆ: (ಗುತ್ತಿಗೆದಾರರುಗಳ ಸಂಪೂರ್ಣ ಮಾಹಿತಿ ನೀಡುವುದು).</td><td rowspan="2">ಬೀದರ್ ಜಿಲ್ಲೆಯಡಿ ಗೋದಾವರಿ ಕಣಿವೆಯ ಮಾಂಜ್ರಾ ನದಿ ಪಾತ್ರದಡಿ ಕೃಷ್ಣಾ ಭಾಗ್ಯ ಜಲ ನಿಗಮದ ವತಿಯಿಂದ ಈ ಕೆಳಕಂಡ 4 ಸರಣಿ ಬ್ರಿಡ್ಜ್ ಕಂ ಬ್ಯಾರೇಜ್ ಕಾಮಗಾರಿಗಳನ್ನು ಕೈಗೆತ್ತಿಕೊಂಡು ಪೂರ್ಣಗೊಳಿಸಲಾಗಿದೆ. ವಿವರಗಳು ಈ ಕೆಳಗಿನಂತಿವೆ:-
<table>
<tr><th>ಕ್ರ ಸಂ</th><th>ಯೋಜನೆ ಹೆಸರು</th><th>ಗುತ್ತಿಗೆದಾರರ ಹೆಸರು</th><th>ನಿರ್ಮಾಣದ ವೆಚ್ಚ (ರೂ.ಕೋಟಿಗಳಲ್ಲಿ)</th><th>ಪೂರ್ಣಗೊಂಡ ವರ್ಷ</th><th>ನೀರಾವರಿಗೆ ಒಳಪಡುವ ಕ್ಷೇತ್ರ (ಹಿಂಗಾರು & ಮುಂಗಾರು) ಎಕರೆ)</th></tr>
<tr><td>1</td><td>ಜೀರಗಿಹಾಳ ಬ್ರಿಡ್ಜ್ ಕಂ ಬ್ಯಾರೇಜ್</td><td>ಶ್ರೀ. ಪ್ರಭಾಕರ್ ರೆಡ್ಡಿ, ಹೈದರಾಬಾದ್.</td><td>57.84</td><td>2014</td><td>4,892.67</td></tr>
<tr><td>2</td><td>ಮಾಣಿಕೇಶ್ವರ ಬ್ರಿಡ್ಜ್ ಕಂ ಬ್ಯಾರೇಜ್</td><td>ಮೆ: ಮೈಸೂರ್ ಕನ್‌ಸ್ಟ್ರಕ್ಷನ್ಸ್ ಲಿ., ಬೆಂಗಳೂರು.</td><td>50.73</td><td>2012</td><td>4,892.67</td></tr>
<tr><td>3</td><td>ಹಾಲಹಳ್ಳಿ ಬ್ರಿಡ್ಜ್ ಕಂ ಬ್ಯಾರೇಜ್</td><td>ಶ್ರೀ. ಎಸ್.ಎಂ. ಆನಂದ್, ಬಿಜಾಪುರ.</td><td>104.27</td><td>2013</td><td>16,635.00</td></tr>
<tr><td>4</td><td>ಚಂದಾಪೂರ ಬ್ರಿಡ್ಜ್ ಕಂ ಬ್ಯಾರೇಜ್</td><td>ಮೆ: ಆರ್. ಎನ್ ನಾಯಕ್ & ಸನ್ಸ್ ಹುಬ್ಬಳ್ಳಿ</td><td>58.66</td><td>2011</td><td>4,892.67</td></tr>
<tr><td></td><td>ಒಟ್ಟು</td><td></td><td>271.50</td><td></td><td>31,313</td></tr>
</table>
ಸದರಿ ಸರಣಿ ಬ್ಯಾರೇಜ್ ಗಳ ನಿರ್ಮಾಣದಿಂದ ಹಿಂಗಾರು ಹಾಗೂ ಮುಂಗಾರು ಹಂಗಾಮಿಗೆ ಒಟ್ಟು 31,313.00 ಎಕರೆ ಪ್ರದೇಶಕ್ಕೆ ನೀರಾವರಿ ಸೌಲಭ್ಯ ಕಲ್ಪಿಸಲಾಗಿರುತ್ತದೆ. ಬ್ಯಾರೇಜ್‌ನಲ್ಲಿನ ನೀರಿನ ಸಂಗ್ರಹಣೆಯಿಂದ ಭೂಮಿಯಲ್ಲಿ ಅಂತರ್ಜಲ ನೀರಿನ ಮಟ್ಟದ ಪ್ರಮಾಣ ಏರಿಕೆಯಾಗಿರುತ್ತದೆ ಮತ್ತು ಸುತ್ತಮುತ್ತಲಿನ ನಗರ, ಪಟ್ಟಣ ಮತ್ತು ಗ್ರಾಮಗಳಿಗೆ ಕುಡಿಯುವ ನೀರಿನ ಯೋಜನೆಯನ್ನು ಕಲ್ಪಿಸಲಾಗಿದೆ. ಸದರಿ ಬ್ಯಾರೇಜುಗಳಲ್ಲಿನ ನೀರಿನ ಸಂಗ್ರಹಣೆಯಿಂದ ರೈತರು ಸ್ವತ: ನೀರನ್ನು ಎತ್ತಿ ಉಪಯೋಗಿಸುವುದಾಗಿದ್ದು, ಅದರಂತೆ ರೈತರು ಉಪಯೋಗಿಸಿಕೊಳ್ಳುತ್ತಿರುತ್ತಾರೆ.</td></tr>
<tr><td>ಇ</td><td>ಈ ಸರಣಿ ಬ್ಯಾರೇಜ್‌ಗಳ ನಿರ್ಮಾಣದಿಂದ ಒಟ್ಟು ಎಷ್ಟು ಎಕರೆ ಪ್ರದೇಶಕ್ಕೆ ನೀರಾವರಿ ಸೌಲಭ್ಯ ಕಲ್ಪಿಸಲಾಗಿದೆ; (ಸ್ಪಷ್ಟವಾದ ವಿವರ ನೀಡುವುದು)</td></tr>
</table>

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಈ | ಹಾಗಿದ್ದಲ್ಲಿ, ನೂರಾರು ಕೋಟಿ ರೂಪಾಯಿ ವೆಚ್ಚ ಮಾಡಿ ನಿರ್ಮಾಣ ಮಾಡಲಾದ ಯೋಜನೆಯಲ್ಲಿ ಅಕ್ರಮ ಮತ್ತು ಲೋಪದೋಷಗಳು ಉಂಟಾಗಲು ಕಾರಣವೇನು; ಇದಕ್ಕೆ ಕಾರಣರಾದವರುಗಳ ವಿರುದ್ಧ ಸರ್ಕಾರ ಯಾವ ಕ್ರಮ ಕೈಗೊಳ್ಳಲಾಗಿದೆ? (ಸಂಪೂರ್ಣ ಮಾಹಿತಿ ನೀಡುವುದು) | ಬೀದರ ಜಿಲ್ಲೆಯ, ಚಂದಾಪೂರ, ಹಾಲಹಳ್ಳಿ, ಜೀರಗಿಹಾಳ ಮತ್ತು ಮಾಣಿಕೇಶ್ವರ ಬ್ರಿಡ್ಜ್ ಕಂ ಬ್ಯಾರೇಜ್‌ನ ಗೇಟುಗಳು 2016 ನೇ ಸಾಲಿನಲ್ಲಿ ಬೃಹತ್ ಪ್ರಮಾಣದ ಪ್ರವಾಹದಿಂದ ಕೆಲವು ಗೇಟುಗಳು ಹಾನಿಗೊಳಗಾಗಿದ್ದು, ಹಾನಿಗೊಳಗಾಗಿದ್ದ ಗೇಟುಗಳನ್ನು 2017 ನೇ ಸಾಲಿನಲ್ಲಿ ಮೂಲ ಗುತ್ತಿಗೆದಾರರಿಂದ. ನಿಗಮಕ್ಕೆ ಯಾವುದೇ ಹೆಚ್ಚಿನ ಆರ್ಥಿಕ ಹೊರೆ ಇಲ್ಲದೇ ದುರಸ್ತಿಯನ್ನು ಕೈಗೊಂಡು ಪೂರ್ಣಗೊಳಿಸಲಾಗಿದೆ. ಸದರಿ ಬ್ಯಾರೇಜುಗಳಿಗೆ ಅಳವಡಿಸಲಾದ ಗೋಡಬೋಲೆ ಗೇಟುಗಳು ಸಮರ್ಪಕವಾಗಿ ಉದ್ದೇಶಿಸಿದಂತೆ ಕಾರ್ಯನಿರ್ವಹಿಸುತ್ತಿರುವುದರಿಂದ ಗುತ್ತಿಗೆದಾರರು ಮತ್ತು ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಂಡಿರುವುದಿಲ್ಲ. |

ಸಂಖ್ಯೆ:ಜಸಂಇ 136 ಎಂಎಲ್ಎ 2021

(ಗೋವಿಂದ ಎಂ.ಕಾರಜೋಳ)
ಜಲಸಂಪನ್ಮೂಲ ಸಚಿವರು.